CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೪, ೨೦೦೪ (ಆಶ್ವಯುಜ ೨೨, ಶಕ ವರ್ಷ ೧೯೨೬) | ಸಂಚಿಕೆ ೪೨ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಸಹಾಯಕ ನಿರ್ದೇಶಕರ ಕಛೇರಿ, ಪಶುವೈದ್ಯ ಆಸ್ಪತ್ರೆ, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ
### ಟೆಂಡರ್ ಮತ್ತು ಬಹಿರಂಗ ಹರಾಜು ಪ್ರಕಟಣೆ

**ಕ್ರ.ಸಂ. ಸನಿ:ಪಆಹೊ:ಅ.ವಾ.ವಿಲೇವಾರಿ/04-05:310, ದಿನಾಂಕ: 24ನೇ ಸೆಪ್ಟೆಂಬರ್, 2004**

ಈ ಕೆಳಗೆ ನಮೂದಿಸಿರುವ ಅನುಪಯುಕ್ತ ವಾಹನಗಳನ್ನು ದಿನಾಂಕ: 24.11.2004 ರಂದು ಬೆಳಿಗ್ಗೆ 10-30 ಗಂಟೆಗೆ ಕಛೇರಿಯ ಆವರಣದಲ್ಲಿ ವಾಹನಗಳು ಇರುವ ಸ್ಥಿತಿಯಲ್ಲಿ ಸಾರ್ವಜನಿಕರ ಸಮಕ್ಷಮ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಖರೀದಿಸಬಹುದು.

| ಕ್ರಮ ಸಂಖ್ಯೆ | ವಾಹನ ಸಂಖ್ಯೆ ಹಾಗೂ ವಿಧ | ವಿಕ್ರಯದ ಸ್ಥಳ | ಹರಾಜಿನ ದಿನಾಂಕ ಮತ್ತು ಸಮಯ |
|---|---|---|---|
| 1. | ಸಿ.ಎ.ಜಿ. 7649 ಮಹೇಂದ್ರ ಜೀಪ್ (ಅನುಪಯುಕ್ತ) 1988 | ಸಹಾಯಕ ನಿರ್ದೇಶಕರ ಕಛೇರಿ, ಪಶುವೈದ್ಯ ಆಸ್ಪತ್ರೆ ಹೊಸನಗರ. | ದಿನಾಂಕ: 24.11.2004 ಬೆಳಿಗ್ಗೆ 10-30 ಗಂಟೆ |
| 2. | ಸಿ.ಎ.ಜಿ-7554 ರಾಜ್‌ದೂತ್ ಮೋಟಾರ್ ಸೈಕಲ್ (ಅನುಪಯುಕ್ತ) 1983 | ಸಹಾಯಕ ನಿರ್ದೇಶಕರ ಕಛೇರಿ ಪಶುವೈದ್ಯ ಆಸ್ಪತ್ರೆ ಹೊಸನಗರ. | ದಿನಾಂಕ: 24.11.2004 ಬೆಳಿಗ್ಗೆ 10-30 ಗಂಟೆ |
| 3. | ಕೆಎ15-ಜಿ-7 ಟಿ.ವಿ.ಎಸ್. ಸುಜುಕಿ. ಮೋಟಾರ್ ಸೈಕಲ್ (ಅನುಪಯುಕ್ತ) 1992 | ಸಹಾಯಕ ನಿರ್ದೇಶಕರ ಕಛೇರಿ ಪಶುವೈದ್ಯ ಆಸ್ಪತ್ರೆ ಹೊಸನಗರ. | ದಿನಾಂಕ: 24.11.2004 ಬೆಳಿಗ್ಗೆ 10-30 ಗಂಟೆ |

ಹರಾಜಿನ ಬಗ್ಗೆ ಹೆಚ್ಚಿನ ವಿವರಗಳಿಗೆ ಮತ್ತು ಷರತ್ತುಗಳಿಗೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದು ಹಾಗೂ ವಾಹನಗಳ ಸ್ಥಿತಿಯನ್ನು ವೀಕ್ಷಿಸಬಹುದು.

**ನಿಬಂಧನೆಗಳು**

1. ಕ್ರ.ಸಂ. (2)ರ ವಾಹನದ ಯಾವುದೇ ದಾಖಲಾತಿಗಳನ್ನು ನೀಡಲಾಗುವುದಿಲ್ಲ. ಆದ್ದರಿಂದ ವಾಹನವನ್ನು ದುರಸ್ತಿಗೊಳಿಸಿ ರಸ್ತೆ ಮೇಲೆ ಓಡಿಸುವ ಹಕ್ಕನ್ನು ಕಳೆದುಕೊಂಡಿರುತ್ತಾರೆ ಎಂಬ ಅಂಶವನ್ನು ತಿಳಿಯತಕ್ಕದ್ದು. ಕ್ರ.ಸಂ. (1) ಮತ್ತು (3) ವಾಹನಕ್ಕೆ ಸಂಬಂಧಪಟ್ಟ ರಿಜಿಸ್ಟ್ರೇಷನ್ ದಾಖಲಾತಿಗಳನ್ನು ಮೇಲಾಧಿಕಾರಿಗಳ ಒಪ್ಪಿಗೆ ಪಡೆದನಂತರ ನೀಡಲಾಗುವುದು.
2. ಹರಾಜು ಟೆಂಡರ್‌ನಲ್ಲಿ ಭಾಗವಹಿಸುವವರು ಕ್ರ.ಸಂ. (1)ಕ್ಕೆ ರೂ. 4,000-00, ಕ್ರ.ಸಂ. (2)ಕ್ಕೆ ರೂ. 300-00 ಕ್ರ.ಸಂ. 3ಕ್ಕೆ ರೂ. 500-00 ಹಣವನ್ನು ಡಿ.ಡಿ. ರೂಪದಲ್ಲಿ ಸಹಾಯಕ ನಿರ್ದೇಶಕರು, ಪಶು ಆಸ್ಪತ್ರೆ, ಹೊಸನಗರ, ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಪಡೆದು ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು.
3. ಗುಪ್ತ ಮೊಹರ್ ಟೆಂಡರ್‌ಗಳನ್ನು ಈ ಕಛೇರಿಗೆ ದಿನಾಂಕ: 24.11.2004ರ ಬೆಳಿಗ್ಗೆ 10-30 ಗಂಟೆಯೊಳಗೆ ತಲುಪಿಸತಕ್ಕದ್ದು, ವಿಳಂಬಕ್ಕೆ ಅಧಿಕಾರಿಗಳು ಜವಾಬ್ದಾರರಲ್ಲ, ಟೆಂಡರ್ ಫಾರಂಗಳನ್ನು ಬಹಿರಂಗ ಹರಾಜು ಮುಗಿದ ಕೂಡಲೇ ಬಿಡ್ಡುದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

4. ಹರಾಜಿನಲ್ಲಿ ಭಾಗವಹಿಸಿ ಹೆಚ್ಚಿಗೆ ಹರಾಜು ಕೂಗಲ್ಪಟ್ಟ ಅಭ್ಯರ್ಥಿಯು ಸ್ಥಳದಲ್ಲಿಯೇ ಹರಾಜಿನ ಶೇಕಡ 25ರಷ್ಟು ಮೊತ್ತವನ್ನು ಪಾವತಿಸುವುದು. ಉಳಿದ ಮೊತ್ತವನ್ನು ಉಪ ನಿರ್ದೇಶಕರು, ಪಶು ಪಾಲನಾ ಇಲಾಖೆ, ಶಿವಮೊಗ್ಗ ಇವರ ವಿಲೇವಾರಿ ಅನುಮತಿ ನೀಡಿದ ದಿನಾಂಕದಿಂದ 20 ದಿನಗಳೊಳಗೆ ಪೂರ್ಣ ಹಣ ಪಾವತಿಸಿ ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕದ್ದು. ವಿಸ್ತರಿಸಿದ ಅವಧಿಯೊಳಗೆ ವಾಹನವನ್ನು ಸ್ವಾಧೀನಕ್ಕೆ ಪಡೆದುಕೊಳ್ಳದಿದ್ದಲ್ಲಿ ಪಾವತಿಸಿರುವ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಚಾಲ್ತಿಯಲ್ಲಿಯ ಮಾರಾಟ ತೆರಿಗೆ ಮತ್ತು ಸೆಸ್‌ಗಳನ್ನು ನಿಯಮಾನುಸಾರ ಪ್ರತ್ಯೇಕವಾಗಿ ಪಾವತಿ ಮಾಡತಕ್ಕದ್ದು.
6. ಜಯಶೀಲರಾದ ಹರಾಜುದಾರರೇ ವಾಹನವನ್ನು ಸ್ವಂತ ಖರ್ಚಿನಲ್ಲಿ ವಾಹನವಿರುವ ಸ್ಥಳದಿಂದ ಸಾಗಿಸಿಕೊಳ್ಳತಕ್ಕದ್ದು.
7. ಯಾವುದೇ ಸಂದರ್ಭದಲ್ಲಿ ಹರಾಜನ್ನು ಅಂಗೀಕರಿಸುವ/ ತಿರಸ್ಕರಿಸುವ/ ಮುಂದೂಡಲ್ಪಡುವ ಎಲ್ಲಾ ಅಧಿಕಾರವು ಈ ಕಾರ್ಯಾಲಯಕ್ಕೆ ಸಂಬಂಧಪಟ್ಟದ್ದಾಗಿರುತ್ತದೆ.
8. ಸೂಚನಾ ಫಲಕದಲ್ಲಿ ಪ್ರಕಟಿಸಲಾಗಿದೆ.

ಪಿ.ಆರ್.459 ಸಹಾಯಕ ನಿರ್ದೇಶಕರು, ಪಶುವೈದ್ಯ ಆಸ್ಪತ್ರೆ, ಹೊಸನಗರ.

**FORM-IV**
**(See Rule 12)**
**NOTICE**

It is hereby notified that the undersigned has changed his name from **N.G. MOHAN to RAM MOHAN N.G.**

PD-157

**ಕರ್ನಾಟಕ ಸರ್ಕಾರಿ ವಿಮಾ ಇಲಾಖೆ**

**ಅನುಚರರ ಪರಿಶಿಷ್ಟ ಜಾತಿ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆ ಪಟ್ಟಿ**
**ಸಂಖ್ಯೆ ಸಿ.ಶಾ. ಬ್ಯಾಲಾ.ನೇ 1379/04-05 ದಿನಾಂಕ: 16ನೇ ಸೆಪ್ಟೆಂಬರ್, 2004**

| ಹುದ್ದೆಗಳ ವಿವರ | ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ | ವಿದ್ಯಾರ್ಹತೆ ಶೇಕಡ ಪ್ರಮಾಣ | ಷರಾ |
|---|---|---|---|---|---|---|
| ಅನುಚರರು ವೇತನ ಶ್ರೇಣಿ ರೂ. 2600-4350 | 1. | ಗಂಗಾಧರ ಕಲ್ಲಪ್ಪಾ ಘಸ್ತಿ ಸಾರಾಪುರ ಅಂಚೆ, ಹುಕ್ಕೇರಿ ತಾಲ್ಲೂಕು, ಬೆಳಗಾಂ-591309. | 24.07.1966 | 7ನೇ ತರಗತಿ | 92.83 | |
| **ಹೆಚ್ಚುವರಿ ಪಟ್ಟಿ** | | | | | | |
| ಅನುಚರರು ವೇತನ ಶ್ರೇಣಿ ರೂ. 2600-4350 | 1. | ರಾಚಯ್ಯ, ನಂಜಯ್ಯನವರ ಮಗ, ಮಾದಾಪುರ, ಟಿ. ನರಸೀಪುರ ತಾಲ್ಲೂಕು, ಮೈಸೂರು-571124. | 20.07.1971 | 7ನೇ ತರಗತಿ | 91.64 | |

ಪಿ.ಆರ್.456 ನಿರ್ದೇಶಕರು, ವಿಮಾ ಇಲಾಖೆ.

**KARNATAKA PUBLIC SERVICE COMMISSION, 'PARK HOUSE' BANGALORE-1**
**NOTIFICATION**
**No. R(2) 854/04-05/PSC Dated: 16th September, 2004**

In pursuance of this Office Notification No. PSC 01 RTB1 (CE) 2003 Dated: 06.09.2003, the provisional select list of candidates selected for 4 posts of Tracer in the Department of Town Planning on the basis of their performance in the competitive examination held on 22nd of February 2004 in accordance with the Karnataka Civil Services (Direct Recruitment by Competitive Examinations) (General) Rules 2001, was published vide notification of even number Dated: 07.08.2004 inviting objections, if any, from candidates likely to be affected within 30 days of its publication, As no objections have been received the final select list prepared under rule 6 of the said Rules is as hereunder:

Appointing Authority: Director
Name of the Department: Town planning

| Sl. No. | Name of the Candidate | Reg. No. | Date of Birth | Reservation |
|---|---|---|---|---|
| 1. | Rupa Shivayyanamath, Near Garud Garage, Hubli Road, Laxmeshwar, Shirahatti-582116 | 8020 | 14.02.73 | GM |
| 2. | Nasira A. D/o Akbar Sharief, Above Galaxy Mens Wear, Ist Main Road, L.N. Colony, Yeswantpur, Bangalore-560022. | 8028 | 21.04.81 | GM/2B/W |

| Sl. No. | Name of the Candidate | Reg. No. | Date of Birth | Reservation |
|---|---|---|---|---|
| 3. | Kalavani A.<br>No. 326, IIIrd Square Hoysala Nagar, Ulsoor, Bangalore-560008. | 8033 | 25.11.68 | SC |
| 4. | Mangal B.R.<br>No. 1206 II Main IInd Cross, Sharad Nilaya Vijayanagar, Bangalore-560040. | 8015 | 05.03.83 | 2A |

**Note:** The selection of all Candidates in this list is subject to the final decision of the Hon'ble Supreme Court of India in WA (Civil) 232/99, relating to women reservation.

**B.S. RAMAPRASAD**
PR-457 Secretary,
Karnataka Public Service Commission.

**KARNATAKA PUBLIC SERVICE COMMISSION, 'PARK HOUSE' BANGALORE-1**
**NOTIFICATION**
**No. R(2) 864/04-05/PSC Dated: 23rd September, 2004**

In pursuance of this Office Notification No. PSC 01 RTB1 (CE) 2003 Dated: 06.09.2003, the provisional select list of candidates selected for 18 posts of Legal Metrology Inspector in the Department of Legal Metrology on the basis of their performance in the competitive examination held on 4th January 2004 in accordance with the Karnataka Civil Services (Direct Recruitment by Competitive Examinations) (General) Rules 2001, was published vide notification of even number Dated: 02.07.2004 iviting objections, if any, from candidates likely to be affected within 30 days of its publication. As no objections have been received the final select list prepared under rule 6 of the said Rules is as hereunder:

Appointing Authority: Controller of Legal Metrology.
Name of the Department: Legal Metrology.

| Sl. No. | Name of the Candidate | Reg. No. | Date of Birth | Reservation |
|---|---|---|---|---|
| 1. | Ravishchandra S.<br>Sri Byraveswara Nilaya,<br>9th Cross Srinagar Devarayapatna post, Tumkur-572104. | 6105 | 20.06.82 | GM/3B |
| 2. | Hanumanthareddy G.L.<br>Manjunatha Nilaya, Behind BDO Office 4th Cross,<br>Challakere-577522. | 5520 | 09.04.68 | GM/3A |
| 3. | Raghavendra H.<br>No.6, 5th Block, Hebbal Police Quarts Hebbal, Bangalore-560024. | 6406 | 25.02.77 | GM/3A |
| 4. | Suma Rani B.S.<br>No.32, IInd Cross G. Block, Ramakrishna Nagar,<br>Mysore-570023. | 5827 | 15.08.75 | GM/W |
| 5. | Gireesha K.<br>Gowdakoppa, Kodur Post, Hosanagar Tq:<br>Shimoga District-577418. | 6044 | 20.07.74 | GM/RL |
| 6. | Sudhakar S.B.<br>Sasalu at Post, Chicknayakanahalli Tq: Tumkur District-572226. | 6310 | 22.07.72 | GM/3B/RL |
| 7. | Nagaraja T.A.<br>C/o. T. Mahadevaiah, D/No. 4, Sarakki Village, J.P. Nagar, Ist Phase, Bangalore-560078. | 6076 | 20.05.77 | GM/3A/RL |

| Sl. No. | Name of the Candidate | Reg. No. | Date of Birth | Reservation |
|---|---|---|---|---|
| 8. | Umesh Huded H.No. 2010J1K/3 Mouneshwar Colony Near KEB Qtrs. Bailhongal Belgaum District-591102. | 6140 | 20.07.81 | 2A |
| 9. | Anand Kumar H.K. S/o Krishne Gowda H.V. Tubinakere Kavalu Hirisave, C.R. Patna Tq:, Hassan District-573124. | 5347 | 05.02.79 | 3A |
| 10. | Smitha H. D/o, H. Dayananda Near Raghavendra Mutta, Kallare Puttur, D.K.-574201. | 5882 | 16.03.80 | GM/W |
| 11. | Ravi M. Tilavalli, S/o MM Tilavalli Near Vidya Chetan High School Mrutyunjaya Nagar, Ranebennur Haveri District-581115. | 5678 | 12.07.78 | 3B |
| 12. | Shashikant Rajaput Near Talati Bhavan, Rajiv Gandhinagar Afzalpur, Gulbarga District-585301. | 6507 | 28.03.74 | 2A/RL |
| 13. | Parveez M.G. S/o Ghouse Peeran, BEO Office Gandhi Maidan Harihar-577601. | 5485 | 08.08.76 | 2B |
| 14. | Jayashree V. No. 16/A Dwaraka Ist Cross, Eshwaranagar BSK IInd Stage, Bangalore-560070. | 5627 | 11.10.78 | GM/W |
| 15. | Padmavathi G. H. No. 28 K.H.B. Colony, Kuvempu Nagar, Kolar-563101. | 6084 | 20.08.75 | SC |
| 16. | Navitha G. No. EWS 266 4-Cross, 2-Stage, KHB Colony, Basaveshwarnagar, Bangalore-560079. | 6401 | 25.06.81 | 2A/W |
| 17. | Lalitha R. Plot. No.10, 6th Cross, Vijayanagar, Banashankari Nagar Road, Dharwad-580008. | 6494 | 28.04.77 | SC/W |
| 18. | Prabhudeva M.P. Madamuthenahally at Huchhavvanahally Post, Jagalur Tq:, Davangere District-577528. | 5243 | 02.03.69 | ST |

**Note:** The selection of all Candidates in this list is subject to the final decision of Supreme Court of India in WA (Civil) 232/99 relating to women reservation and KAT Application No. 4684/04.

PR-458

**B.S. RAMAPRASAD**
Secretary,
Karnataka Public Service Commission.

## ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಛೇರಿ, ಗುಲ್ಬರ್ಗಾ

### ಅಧಿಸೂಚನೆ

### ಸಂಖ್ಯೆ: ಸಂಗ್ರಹ:ಹಳೆ:ಅನು:178:ಗು:2004, ಗುಲ್ಬರ್ಗಾ, ದಿನಾಂಕ: 10ನೇ ಸೆಪ್ಟೆಂಬರ್, 2004

**ವಿಷಯ :** ಹಳೆಯ ಅನುಪಯುಕ್ತ ಕಿಟ್ ಸಾಮಗ್ರಿಗಳು ಮತ್ತು ಇತರೆ ವಸ್ತುಗಳು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ ಗುಲ್ಬರ್ಗಾ ರವರ ಪತ್ರ ಸಂಖ್ಯೆ: ಸಂಗ್ರಹ:693:ಈವ: 04, ದಿನಾಂಕ: 09.08.2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೆಳಗೆ ನಮೂದಿಸಿರುವ ಹಳೆಯ ಹಾಗೂ ಅನುಪಯುಕ್ತ ಕಿಟ್ ಸಾಮಾನುಗಳು ಹಾಗೂ ಇತರೆ ವಸ್ತುಗಳು ಜಿಲ್ಲಾ ಪೊಲೀಸ್ ಕಛೇರಿಯ (ಹಳೆಯ ಜಿಲ್ಲಾ ಪೊಲೀಸ್ ಕಛೇರಿ ಸೂಪರ್ ಮಾರ್ಕೆಟ್ ಗುಲ್ಬರ್ಗಾ) ಹೊರಾಂಗಣದಲ್ಲಿ, ದಿನಾಂಕ: 30.10.2004ರಂದು ಬೆಳಿಗ್ಗೆ 11.00 ಗಂಟೆಗೆ ಈ ಕೆಳಗಿನ ಷರತ್ತುಗಳ ಮೇರೆಗೆ ಹರಾಜು ಮಾಡಲಾಗುವುದು.

| ಕ್ರಮ ಸಂಖ್ಯೆ | ವಸ್ತುವಿನ ಹೆಸರು | ಪ್ರಮಾಣ |
|---|---|---|
| 1 | 2 | 3 |
| 1. | ಕಿಟ್ ಬಾಕ್ಸ್‌ಗಳು | 206 |
| 2. | ಲೆದರ್ ಪೊಚ್‌ಗಳು | 110 |
| 3. | ಲೆದರ್ ಪ್ರಾಗ್ | 70 |
| 4. | ವಾಟರ್ ಬಾಟಲ್ | 22 |
| 5. | ಕೈಕೊಳಗಳು | 160 |
| 6. | ಬ್ರೌನ್ ಲೆದರ್ ಬೆಲ್ಟ್ | 30 |
| 7. | ಬ್ರೌನ್ ಲೆದರ್ ಕ್ರಾಸ್ ಬೆಲ್ಟ್ | 12 |
| 8. | ಕಪ್ಪು ಲೆದರ್ ಬೆಲ್ಟ್ | 110 |
| 9. | ಬೂಟುಗಳು | 114 |
| 10. | ಸ್ಯಾಂಡಲ್ | 2 |
| 11. | ಬ್ರೌನ್ ಆಕ್ಸ್‌ಫರ್ಡ್ ಶ್ಯೂಜ್ | 47 |
| 12. | ರೈನ್‌ಕೋಟ್ | 50 |
| 13. | ಗ್ರೌಂಡ್ ಶೀಟ್ | 33 |
| 14. | ಉಲನ್ ಓವರ್ ಕೋಟ್ | 30 |
| 15. | ಹಾವರ ಸಾಕ್ಸ್ | 80 |
| 16. | ಹೆಲ್ಮೆಟ್ | 180 |
| 17. | ಜಿ.ಬಿ. | 130 |
| 18. | ಬ್ರೆಶ್ | 35 |
| 19. | ಖಾಲಿ ಪಾಲಿಸ್‌ಸ್ಟೀನ್ | 140 |
| 20. | ಗುಂಡಿಗಳು | 1,000 |
| 21. | ಕೆ.ಎಸ್.ಪಿ. ಬ್ಯಾಡ್ಜ್ | 80 |
| 22. | 5 ಪಾಯಿಂಟೆಡ್ ಸ್ಟಾರ್ | 45 |
| 23. | ಸೀಟಿಗಳು | 80 |
| 24. | ಮೊನೋಗ್ರಾಂ | 15 |
| 25. | ಡಿಎಆರ್ ಬ್ಯಾಡ್ಜ್ | 125 |
| 26. | ಬೆಲ್ಟ್ ಮೊನೋಗ್ರಾಂ | 140 |
| 27. | **ಇತರೆ ಸಾಮಾನುಗಳು** | |
| 1. | ಪೆಟ್ರೋಮ್ಯಾಕ್ಸ್ (ಬಿಜಲಿ) | 03 |
| 2. | ಛತ್ರಿಗಳು | 03 |
| 3. | ರೇಡಿಯೋ | 10 |
| 4. | ಬ್ಯಾಟ್ರಿಗಳು | 06 |
| 5. | ಅಲಾರಾಮ್ ಗಡಿಯಾರ | 11 |

| 1 | 2 | 3 |
|---|---|---|
| 6. | ವಾಲ್‌ಕ್ಲಾಕ್ | 02 |
| 7. | ಕ್ಯಾಮರಾ | 01 |
| 8. | ಐ.ಓ.ಕಿಟ್ ಬಾಕ್ಸ್ | 14 |
| 9. | ಅಲ್ಮೆರಾ | 01 |
| 10. | ಎಲೆಕ್ಟ್ರಾನಿಕ್ಸ್ ಕ್ಯಾಲ್ಕ್ಯುಲೇಟರ್ | 01 |
| 11. | ವಾಟರ್ ಟ್ಯಾಂಕ್ | 01 |

**ಷರತ್ತುಗಳು**

1. ಹರಾಜುದಾರರು ರೂ.500.00 ಗಳ ಠೇವಣಿಯನ್ನು ಹರಾಜು ಪ್ರಾರಂಭವಾಗುವುದಕ್ಕಿಂತ ಮುಂಚೆ ಪೊಲೀಸ್ ಅಧೀಕ್ಷಕರು ಗುಲ್ಬರ್ಗಾ ರವರಲ್ಲಿ ಜಮಾ ಮಾಡತಕ್ಕದ್ದು. ಠೇವಣಿಯಾಗಿಟ್ಟ ಹಣವನ್ನು ಅ-ಯಶಸ್ವಿಯಾದ ಖರೀದಿದಾರರಿಗೆ ಲೀಲಾವು ಮುಗಿದ ನಂತರ ವಾಪಸ್ಸು ಮಾಡಲಾಗುವುದು.
2. ಪ್ರತಿಯೊಂದು ವಸ್ತುಗಳು ಅಥವಾ ವಸ್ತುಗಳ ಗುಂಪನ್ನು ಅತೀ ಹೆಚ್ಚಿನ ದರ (ಮೌಲ್ಯದಲ್ಲಿ) ಕೇಳಿಕೊಂಡ ಹರಾಜಿನವರಿಗೆ ಬಿಟ್ಟುಕೊಡಲಾಗುವುದು.
3. ವಸ್ತುಗಳನ್ನು ಖರೀದಿ ಮಾಡಿದ ಹಣದ ಮೇಲೆ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯನ್ನು ಲೀಲಾವಿನ ಹಣದ ಜೊತೆಯಲ್ಲಿಯೇ ವಸೂಲಿ ಮಾಡಲಾಗುವುದು.
4. ವಸ್ತುಗಳನ್ನು ಖರೀದಿ ಮಾಡಿದವರನ್ನು ತಾವು ಖರೀದಿ ಮಾಡಿದ ಸಾಮಗ್ರಿಗಳನ್ನು ಅದೇ ದಿವಸ ಹರಾಜಿನ ಸ್ಥಳದಿಂದ ಸಾಗಿಸಿಕೊಳ್ಳುವ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.
5. ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೇ ಲೀಲಾವನ್ನು ಮುನ್ಸೂಚನೆ ಇಲ್ಲದೇ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪಡೆದಿರುತ್ತಾರೆ.

**ಡಾ: ಕೆ. ರಾಮಚಂದ್ರರಾವ್, ಐಪಿಎಸ್,**

ಪಿ.ಆರ್.463 ಪೊಲೀಸ್ ಸೂಪರಿಂಟೆಂಡೆಂಟ್, ಗುಲ್ಬರ್ಗಾ.

**ಉಪ ನಿರ್ದೇಶಕರು (ತರಬೇತಿ) ರವರ ಕಛೇರಿ, ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-560088**

**ಹುಣಸೇ ಫಸಲು ಹರಾಜು ಇಸ್ತಿಹಾರ**

**ಸಂಖ್ಯೆ: ರಾಜಾಸಂತಕೇಂ:ಉಗ್ರಾಣ:ಹು.ಫ.ಹ:2004-05: ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್, 2004**

ಈ ಮೂಲಕ ಸಾರ್ವಜನಿಕರ ಅವಗಾಹನೆಗಾಗಿ ಪ್ರಚಾರ ಪಡಿಸುವುದೇನೆಂದರೆ, ಈ ಕ್ಷೇತ್ರಕ್ಕೆ ಸೇರಿದ 80 ಹುಣಸೇ ಮರಗಳಲ್ಲಿರುವ ಹುಣಸೇ ಫಸಲನ್ನು ದಿನಾಂಕ: 04.11.2004ರ ಬೆಳಿಗ್ಗೆ 11ಗಂಟೆಗೆ ಈ ಕೇಂದ್ರದ ಆವರಣದಲ್ಲಿ ಈ ಕೆಳಕಂಡ ನಿಬಂಧನೆಗಳಿಗೆ ಅನುಸಾರವಾಗಿ ವಿಲೇವಾರಿ ಮಾಡಲಾಗುವುದು.

**ನಿಬಂಧನೆಗಳು:**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿನ ಮೊದಲು ರೂ.1,000-00ಗಳ ಠೇವಣಿ ಇಡಬೇಕು. ಈ ಹಣವನ್ನು ಹರಾಜು ಮುಗಿದ ನಂತರ ಹಿಂತಿರುಗಿಸಲಾಗುವುದು. (ಹೆಚ್ಚು ಬಿಡ್ ಮಾಡಿರುವವರನ್ನು ಹೊರತುಪಡಿಸಿ).
2. ಯಶಸ್ವಿ ಹರಾಜುದಾರರು ಪೂರ್ಣ ಮೊಬಲಗನ್ನು ಮತ್ತು ಅದಕ್ಕೆ ಸಂಬಂಧಿಸಿದ ತೆರಿಗೆಗಳ ಸಹಿತ ತಕ್ಷಣವೇ ಪಾವತಿ ಮಾಡಿ ರಸೀದಿ ಪಡೆಯತಕ್ಕದ್ದು. ತಪ್ಪಿದ್ದಲ್ಲಿ ಠೇವಣಿಯನ್ನು ದಂಡವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ, ಮೊದಲ ಹರಾಜಿನ ದಿನಾಂಕದಿಂದ 15 ದಿನಗಳೊಳಗಾಗಿ ಮರು ಹರಾಜು ಮಾಡಲಾಗುವುದು. ಅದರಿಂದ ಆದ ನಷ್ಟದ ಮೊಬಲಗನ್ನು ಮೊದಲನೇ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿ ಎಂದು ಪರಿಗಣಿಸಿ ವಸೂಲು ಮಾಡಲಾಗುವುದು. ಲಾಭವೇನಾದರೂ ಬಂದಲ್ಲಿ ಅದಕ್ಕೆ ಅವರು ಅರ್ಹರಾಗಿರುವುದಿಲ್ಲ.
3. ಹರಾಜಿನಲ್ಲಿ ಕೊಂಡ ಹುಣಸೇ ಫಸಲನ್ನು ಎಲ್ಲ ವಿಷಯದಲ್ಲಿಯೂ ಕಾಪಾಡಿಕೊಳ್ಳುವ ಜವಾಬ್ದಾರಿಯು ಫಸಲನ್ನು ಕೊಂಡವರಿಗೆ ಸೇರಿರುತ್ತದೆ. ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ.
4. ಸರ್ಕಾರದ ಸ್ವತ್ತಿಗೆ ಯಾವ ವಿಧವಾದ ನಷ್ಟಗಳೇನಾದರೂ ಆದರೆ ಹರಾಜುದಾರರು ಸ್ವಂತ ಖರ್ಚಿನಿಂದ ಸರಿಪಡಿಸಬೇಕು.
5. ಹರಾಜನ್ನು ಈ ಕೆಳಗೆ ಸಹಿ ಮಾಡಿರುವವರಿಂದ ಅಥವಾ ನಿರ್ದೇಶನಾಲಯದಿಂದ ಅಧಿಕಾರ ಪಡೆದವರಿಂದಾಗಲೀ ನೆಡೆಸಲ್ಪಡುತ್ತದೆ. ಹರಾಜಿನ ಯಾವ ಅಂತಿಮ ನಿರ್ಧಾರವು ಈ ಕೆಳಗೆ ಸಹಿ ಮಾಡಿದವರಿಗೆ ಅಥವಾ ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
6. ಹರಾಜನ್ನು ಯಾವ ಕಾರಣವನ್ನು ನೀಡದೇ ಯಾವ ಸಂದರ್ಭದಲ್ಲಾದರೂ ರದ್ದುಪಡಿಸುವ ಹಕ್ಕು ಹರಾಜು ಮಾಡುವ ಅಧಿಕಾರಿಗಳಿಗೆ ಸೇರಿರುತ್ತದೆ.
7. ಹೆಚ್ಚಿನ ಮಾಹಿತಿಗಾಗಿ, ಉಪ ನಿರ್ದೇಶಕರು (ತರಬೇತಿ), ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಬೆಂಗಳೂರು-88, ರವರ ಕಛೇರಿ ವೇಳೆಯಲ್ಲಿ ಪಡೆಯಬಹುದು.
8. ಈ ಹರಾಜಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಿ ನೌಕರರು ಭಾಗವಹಿಸುವಂತಿಲ್ಲ.

ಉಪನಿರ್ದೇಶಕರು (ತರಬೇತಿ)

ಪಿ.ಆರ್.464 ರಾಜ್ಯ ಜಾನುವಾರು ಸಂವರ್ಧನಾ ಮತ್ತು

ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು.

## ಟೆಂಡರ್ ಆಹ್ವಾನಿಸುವ ಪ್ರಾಧಿಕಾರ, ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ಪೌರರಕ್ಷಣಾ ನಿರ್ದೇಶಕರ ಕಛೇರಿ, ನಂ.1, ಅಣ್ಣಾಸ್ವಾಮಿ ಮೊದಲಿಯಾರ್ ರಸ್ತೆ, ಬೆಂಗಳೂರು-560 042

## ಟೆಂಡರ್ ನೋಟೀಸ್

**ಸಂಖ್ಯೆ: ಉಗ್ರಾಣ(1)14/ಸಿಜಿಒ/ 2004-05: ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2004**

1. 2004-05ನೇ ಸಾಲಿಗೆ ಈ ಕೆಳಗೆ ನಮೂದಿಸಿದ ಗೃಹರಕ್ಷಕರ ಸಮವಸ್ತ್ರ ಸಾಮಗ್ರಿಗಳನ್ನು ಸರಬರಾಜು ಮಾಡುವ ಸಲುವಾಗಿ ನೋಂದಾವಣೆಗೊಂಡ ಉತ್ಪಾದಕರು ಮತ್ತು ಸರಬರಾಜುದಾರರಿಂದ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ.

**1) ಸಾಮಗ್ರಿಗಳ ವಿವರ**

| ಕ್ರಮ ಸಂಖ್ಯೆ | ಸಾಮಗ್ರಿಯ ಹೆಸರು | ಪ್ರಮಾಣ | ಅಂದಾಜು ಮೌಲ್ಯ |
|---|---|---|---|
| 1 | 2 | 3 | 4 |
| 1. | ಖಾಕಿ ವೆಬ್ ಬೆಲ್ಟ್ | 9433 ಸಂಖ್ಯೆ | 2,82,990.00+ತೆರಿಗೆಗಳು |
| 2. | ಖಾಕಿ ಉಲ್ಲನ್ ಸಾಕ್ಸ್ | 6300 ಜೊತೆ | 1,26,000.00+ತೆರಿಗೆಗಳು |
| 3. | ವಿಷಲ್ ವಿತ್ ಚೈನ್ | 8186 ಸಂಖ್ಯೆ | 1,22,790.00+ತೆರಿಗೆಗಳು |
| 4. | ಕೇನ್ ಲಾಠಿ | 8186 ಸಂಖ್ಯೆ | 1,63,720.00+ತೆರಿಗೆಗಳು |
| 5. | ಉಲ್ಲನ್ ಬೆರೆ ಕ್ಯಾಪ್ | 6300 ಸಂಖ್ಯೆ | 1,89,000.00+ತೆರಿಗೆಗಳು |
| 6. | ಅ) ಬೂಟ್ ಆ್ಯಂಕಲ್ ಕಪ್ಪು (ಡಿ.ಎಂ.ಎಸ್.) | 5966 ಜೊತೆ | 13,12,520.00+ತೆರಿಗೆಗಳು |
| | ಆ) ಜಂಗಲ್ ಬೂಟುಗಳು | 1900 ಜೊತೆ | 4,18,000.00+ತೆರಿಗೆಗಳು |
| | ಇ) ಮಹಿಳಾ ಗೃಹರಕ್ಷಕರ ಬ್ರೌನ್ ಆಕ್ಸ್‌ಫರ್ಡ್ ಬೂಟುಗಳು | 1000 ಜೊತೆ | 2,20,000.00+ತೆರಿಗೆಗಳು |
| 7. | ರೈನ್ ಕೋಟ್ | 935 ಸಂಖ್ಯೆ | 2,33,750.00+ತೆರಿಗೆಗಳು |
| 8. | ಎಫ್.ಜಿ. ಹೆಲ್ಮೆಟ್ | 1870 ಸಂಖ್ಯೆ | 4,86,200.00+ತೆರಿಗೆಗಳು |

2. ಒಟ್ಟು ಅಂದಾಜು ಮೌಲ್ಯ 35.55 ಲಕ್ಷ ಮತ್ತು ಅನ್ವಯಿಸುವ ಯಾವುದಾದರೂ ತೆರಿಗೆಗಳು ಇದ್ದಲ್ಲಿ.
3. ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ನಿರ್ದೇಶಕರು, ಪೌರರಕ್ಷಣೆ, ಬೆಂಗಳೂರು ಇವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ರೂ.200/- ಗಳಿಗೆ (ಎರಡು ನೂರು ರೂಪಾಯಿಗಳು) ಮಾತ್ರ ಪಡೆದ ಡಿ.ಡಿ. ಸಂದಾಯಿಸಿ ಕೆಲಸದ ದಿನಗಳಲ್ಲಿ ಈ ಕಛೇರಿಯಿಂದ ನಿಗದಿತ ಟೆಂಡರ್ ಫಾರಂನ್ನು ಈ ಟೆಂಡರ್ ನೋಟೀಸ್ ಪ್ರಕಟಗೊಂಡ ದಿನಾಂಕದಿಂದ **17.11.2004ರ ಸಂಜೆ 4.00 ಗಂಟೆಯವರೆಗೆ ಪಡೆಯಬಹುದಾಗಿದೆ.**
4. ಟೆಂಡರಿನೊಂದಿಗೆ ಐಟಂ ಬೆಲೆಯ ಶೇಕಡಾ 1.5ರ ಮೌಲ್ಯದ ಇ.ಎಂ.ಡಿ. ಯನ್ನು ಲಗತ್ತಿಸತಕ್ಕದ್ದು.
5. ಸರಬರಾಜು ಆದೇಶ ನೀಡಿದ ದಿನಾಂಕದಿಂದ 60 ದಿನಗಳ ಕಾಲಾವಧಿಯಲ್ಲಿ ಸರಬರಾಜನ್ನು ಪೂರ್ಣಗೊಳಿಸತಕ್ಕದ್ದು.
6. ಟೆಂಡರನ್ನು ಸ್ವೀಕರಿಸಲು ಕಡೆಯ ದಿನಾಂಕ: 20.11.2004ರ **ಸಂಜೆ 4.00 ಗಂಟೆ.**
7. ಟೆಂಡರನ್ನು ದಿನಾಂಕ: 23.11.2004 ರಂದು ಸಂಜೆ 4 ಗಂಟೆಗೆ ತೆರೆಯಲಾಗುವುದು.
8. ಯಾವುದೇ ಕಾರಣ ನೀಡದೇ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾದಿರಿಸಲಾಗಿದೆ.
9. **ಸ್ಪೆಸಿಫಿಕೇಷನ್:**

| Sl. No. | Name of the item | Quantity | Specification |
|---|---|---|---|
| 1. | Khaki web belt | 9433 Nos. | Khaki colour. 2" wide and 42" long with rolled edges of 22 D ends 13 picks (on the surface of double plain weave with white metal buckles). The component parts shall be of same colour and the material shall be free from dying. The colour should be fast to light and washing. |
| 2. | Khaki woolen socks | 6300 Pairs | Dark khaki colour made out of wool weighing between 87 to 111 grams. 73 to 84 needles in different sizes of 25 cms. 27 cms, 28 cms, 29 cms, 30 cms, and 31 cms. Dhariwal or Lal Imli quality only. |
| 3. | Whistle with chain | 8186 Nos. | Whistle with chain shall be of white metal metropolitan type 5/8"x3-5/8" long including eyehole. Whistle should weigh 42 gms. word "Home Guards" should be punched on whistle. Whistle should be linked with white metal chain with hooks & rings, chain should be of 10-5/8" long (excluding the hook & of 8 figures type) link of 1" & ring length out side & of 13 SWG wire with 2/16" outer dia of ring 12/3" SWG & hook $1^1/_2$" length and 12 SWG wire. |

| Sl. No. | Name of the item | Quantity | Specification |
|---|---|---|---|
| 4. | Cane lathi | 8186 Nos. | Cane lathi length of 83 cms, and circumference at either ends 7 $^{1}/_{2}$ cms. One hole at a distance of 18 cms, from the top. The length of the leather thong 62 cms. |
| 5. | Woolen beret cap | 6300 Nos. | Wollen beret caps in different sizes made of Khaki woolen serge cloth in a single piece. The circular lining of the cap should be of black silk material. The inside of the cap should have a plastic sheet covering to prevent the inner cloth from getting oil stains. There should be two round holes in front of the cap to insert cap badge, opposite the eyelets. The two round holes should be 2$^{1}/_{2}$ cms, apart and 4$^{1}/_{2}$ cms, above the edge of the cap. |
| 6. | a) Boot ankle DMS | 5966 Pairs | As per I.S. No. 11226-85.<br>The Black ankle boot should be provided with prime part of leather as toe. The Quarter and vamp should be well embossed.<br>Stiff zakarain leather. Care should be taken during mounting process by maintaning time and temperature. Bottom sole should be DMS.<br>The in-sole and toe puff should be well tanned EI leather. The bewild operation should be done for in-sole. Proper stiffener should be used. The eyelids space and points should be properly fixed. Sock lining should be E.I. light leather. For upper processing proper care should be taken and chorum stitching done accordingly. The mounting of upper with sole should be in central line of bottom and back Reinforcement material (Wooden piece) should be used. |
| | b) Jungle Boot | 1900 Pairs | ISI No. I.S. 3736/83-Jungle boot made out of canvas cloth with olive green colour in different sizes. |
| | c) Women Home Guards Oxford Brown shoes. | 1000 Pairs | 1) Upper Leather-Full Chrome plain brown colour grain leather 1.2 to 1.4 mm thickness. |
| | | | 2) Lining materials: |
| | | | a) Quarter — Readily available lining leather 0.9 mm to 1mm thickness. |
| | | | b) Vamp — Cotton drill cloth 0.55 mm thickness. |
| | | | 3) Toe & Stiffener — B.T. Light leather of 1.2mm to 1.4 mm thickness. |
| | | | 4) Toes Compound — Maida flour + Copper sulphate mixture to be used. |
| | | | 5) Collar — Cushion padded 5mm thickness. |
| | | | 6) Socks — E.I. Light leather of 0.8 mm to 1mm thickness pasted to insole with cushion 2/3 mm thickness at the seat portion. |
| | | | 7) Insole — Vegetables taned compressed sole leather 2.5 to 3mm thickness. |
| | | | 8) Bottom leather sole 3.7 mm Heel lifts 2.6mm with 2.1mm — Sole & Heel/ welt vegetable tanned compressed sole leather-5 to 6mm thickness. |

| Sl. No. | Name of the item | Quantity | Specification | | |
|---|---|---|---|---|---|
| | | | 9) | Heel Lift | Full leather with PS layer. |
| | | | 10) | Bottom filling | Leather pieces. |
| | | | 11) | Shank | Steel Shank Strip Galvanized. |
| | | | 12) | **Grinderies:** | |
| | | | a) | Eyelet | Double coated Aluminium eyelet. |
| | | | b) | Thread | Upper closing-No.30 Cotton Belt Stitching-No.10 Cotton. |
| | | | c) | Laces | Cotton fabric Lace Flat length 22". |
| | | | 13) | Lat | Medium toe confirming to ISI 1638 |
| | | | 14) | Mass | Size 8 weights 800 gms. |
| | | | 15) | Construction | VC Sole attaching operation. |
| | | | 16) | Weight (back length) | 3 for size 8 including sole and varies with sizes. |
| | | | 17) | Stitches | Per inch ten stitches |
| | | | 18) | Tongue | As per upper leather used for Sl.No. 1 above. |
| 7. | Rain coats | 935 Nos. | ISI No. I.S. 6110/83-Double texture rubberized water proof fabrics (length 121 cms. Sleeves length 74 cms. Sleeves circumference at wrist 32 cms. West circumference 142 cms. 118 cms. Length belt with buckle width of 5 cms. Two side pockets). | | |
| 8. | F.G. Helmet | 1870 Nos. | Olive Green fibre Glass Helmets for Home Guards non metal-confirming to IS No. 9562/1980 with amendment No.1 & 2 MASS OF COMPLETE. Helmet without peak if provided shall not exceed 1500 grams. Shall of the helmet shall be of non-metallic materials confirming to tent requirement given under clause 5 of IS 4151/1982. White metal Home Guard Emblem (as per sample displayed in this office) should be provided in front of the helmet. The letters 'HG' at a visible point inside the helmet should be impregnated. | | |

ಉಪ ಮಹಾ ಸಮಾದೇಷ್ಟರು ಗೃಹರಕ್ಷಕ ದಳ
ಹಾಗೂ ಉಪ ನಿರ್ದೇಶಕರು, ಪೌರರಕ್ಷಣೆ
ಮತ್ತು ಟೆಂಡರ್ ಆಹ್ವಾನಿಸುವ ಪ್ರಾಧಿಕಾರ.

ಪಿ.ಆರ್.466

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-560 004**

**ಸಂಕ್ಷಿಪ್ತ ಅಧಿಸೂಚನೆ**

**ಸಂಖ್ಯೆ: ತೋಇ/ ಆ/ ಸಿ/ ವಿನಿ4/ 86/ 04-05**

ಕರ್ನಾಟಕ ನಾಗರೀಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) (ಸಾಮಾನ್ಯ) ನಿಯಮಗಳು 2001ರ ನಿಯಮ 9ರಡಿಯಲ್ಲಿ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4 ಇಲ್ಲಿ ನಿಗದಿತ ನಮೂನೆಯಲ್ಲಿ ಈ ಕೆಳಗೆ ನಮೂದಿಸಿರುವ ವಾಹನ ಚಾಲಕ ಹುದ್ದೆಗೆ ದಿನಾಂಕ: 04.11.2004 ಅಥವಾ ಅದಕ್ಕೂ ಮುಂಚಿತವಾಗಿ ತೋಟಗಾರಿಕೆ ನಿರ್ದೇಶಕರು, ಬೆಂಗಳೂರು-4ರವರಿಗೆ ತಲುಪುವಂತೆ ಎಲ್ಲಾ ಮಾಹಿತಿಯೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ ಆಹ್ವಾನಿಸಲಾಗಿದೆ.

I. ಎ) **ಹುದ್ದೆಯ ಹೆಸರು:** ವಾಹನ ಚಾಲಕ (ಗ್ರೂಪ್ ಸಿ), (ಬಿ) **ವೇತನ ಶ್ರೇಣಿ:** 3000-5450+60 Spl. Pay., (ಸಿ) ಖಾಲಿ ಇರುವ ಹುದ್ದೆಗಳ ಸಂಖ್ಯೆ ಹಾಗೂ ಸ್ಥಳ: ಬೆಂಗಳೂರು-6, ಕೋಲಾರ-1, ಹಾವೇರಿ-1, ಧಾರವಾಡ-1, ಒಟ್ಟು 9 ಹುದ್ದೆಗಳು.

II. **ವಿದ್ಯಾರ್ಹತೆ:** ಕನಿಷ್ಠ 7ನೇ ತರಗತಿಯಲ್ಲಿ ಪಾಸ್ ಆಗಿರಬೇಕು. ಭಾರಿ ವಾಹನ ಚಾಲನೆಯ ಚಾಲ್ತಿಯಲ್ಲಿರುವ ಪರವಾನಗಿ ಹೊಂದಿರಬೇಕು.

III. **ಮೀಸಲಾತಿ ವಿವರ:** (ಎ) ಸಾಮಾನ್ಯ ವರ್ಗ ಒಟ್ಟು-6 ಹುದ್ದೆಗಳು (ಇತರೆ-3, ಮಹಿಳೆ-1, ಗ್ರಾಮೀಣ ಅಭ್ಯರ್ಥಿ-1, ಮಾಜಿ ಸೈನಿಕರು-1), (ಬಿ) 2ಎ ಒಟ್ಟು-1 ಹುದ್ದೆ (ಇತರೆ-1), (ಸಿ) 3ಎ ಒಟ್ಟು-1 ಹುದ್ದೆ (ಮಹಿಳೆ-1), (ಡಿ) 3ಬಿ ಒಟ್ಟು-1 ಹುದ್ದೆ (ಮಹಿಳೆ-1) ಸೂಚನೆ: ಅರ್ಹ ಮಹಿಳೆ ಅಭ್ಯರ್ಥಿ ದೊರೆಯದಿದ್ದಲ್ಲಿ ಆಯಾ ವರ್ಗದ ಪುರುಷ ಅಭ್ಯರ್ಥಿಗಳಿಂದ ತುಂಬಲಾಗುವುದು.

IV. **ವಯೋಮಿತಿ:** ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕ: **04.11.2004ರಂದು** ಕನಿಷ್ಠ 18 ವರ್ಷ ಹೊಂದಿರಬೇಕು. ಹಾಗೂ ಗರಿಷ್ಠ 33 ವರ್ಷ ಮೀರಿರಬಾರದು. ಪ್ರವರ್ಗ 2ಎ, 3ಎ, 3ಬಿ, ವರ್ಗಗಳಿಗೆ ಗರಿಷ್ಠ ವಯೋಮಿತಿ 36 ವರ್ಷಗಳು ಮೀರಿರಬಾರದು.

V. **ಆಯ್ಕೆ ವಿಧಾನ:** ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಹುದ್ದೆಗೆ ಬೇಕಾದ ದೈಹಿಕ ಅರ್ಹತೆ ಹಾಗೂ ಸಂದರ್ಶನ ಸಮಯದಲ್ಲಿ ಗಳಿಸುವ ಅರ್ಹತಾ ಪರೀಕ್ಷೆಯಲ್ಲಿನ ಅಂಕಗಳ ಆಧಾರದ ಮೇಲೆ ಮೆರಿಟ್ ಲಿಸ್ಟ್ ತಯಾರಿಸಿ ಆಯ್ಕೆ ಆದ ಅರ್ಹ ಅಭ್ಯರ್ಥಿಗಳನ್ನು ವಾಹನ ಚಾಲಕ ಪರೀಕ್ಷೆಗೆ ಒಳಪಡಿಸಲಾಗುವುದು.

VI. **ಶುಲ್ಕದ ವಿವರ:** ಅರ್ಜಿಯ ಜೊತೆ ರೂ. 5/- Crossed I.P.O. ಅನ್ನು ಅರ್ಜಿ ಸಲ್ಲಿಸುವ ದಿನಾಂಕದಿಂದ 15 ದಿನಗಳೊಳಗೆ ಪಡೆದು ತೋಟಗಾರಿಕೆ ನಿರ್ದೇಶಕರವರ ಪದನಾಮಕ್ಕೆ ಬೆಂಗಳೂರಿನಲ್ಲಿ ಸಂದಾಯವಾಗುವಂತೆ ಪಡೆದು ಅರ್ಜಿ ನಮೂನೆಗೆ ಲಗತ್ತಿಸಬೇಕು.

VII. **ಅರ್ಜಿ ಸಲ್ಲಿಸುವ ವಿಧಾನ:** ನಿಗದಿತ ಅರ್ಜಿ ನಮೂನೆ ಹಾಗೂ ಇತರೆ ಷರತ್ತು ಮತ್ತು ನಿಬಂಧನೆ ವಿವರಗಳನ್ನು ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿನ ಗ್ರಂಥಾಲಯದ ಸೂಚನಾ ಫಲಕದಲ್ಲಿ ಪ್ರಕಟಿಸಲಾಗಿದೆ. ಹಾಗೂ ತೋಟಗಾರಿಕೆ ಉಪನಿರ್ದೇಶಕರು, ಜಿಪ, ಕೋಲಾರ, ಹಾವೇರಿ, ಧಾರವಾಡ ಕಛೇರಿಗಳಲ್ಲಿ ಸಹ ಸೂಚನಾ ಫಲಕದಲ್ಲಿ ಪ್ರಕಟಿಸಲಾಗಿದೆ. ಆಸಕ್ತ ಅಭ್ಯರ್ಥಿಗಳು ಇದೇ ಮಾದರಿಯ ನಮೂನೆಯಲ್ಲಿ ಪೂರ್ಣ ಮಾಹಿತಿಯೊಂದಿಗೆ ಅರ್ಜಿ ಭರ್ತಿ ಮಾಡಿ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ಇವರಿಗೆ ದಿನಾಂಕ: **04.11.04ರ** ಒಳಗೆ ಕಛೇರಿ ವೇಳೆಯಲ್ಲಿ (10.00 ರಿಂದ 4.00ರವರೆಗೆ) ಸಲ್ಲಿಸತಕ್ಕದ್ದು. ಲಕೋಟೆ ಮೇಲೆ **ವಾಹನ ಚಾಲಕ ಹುದ್ದೆಗೆ ಅರ್ಜಿ** ಎಂದು ನಮೂದಿಸಬೇಕು.

VIII. ನಿಗದಿತ ಅವಧಿ ಮೀರಿದ ಹಾಗೂ ಅಪೂರ್ಣ ಅರ್ಜಿಯನ್ನು ಅಭ್ಯರ್ಥಿಗೆ ತಿಳಿಸದೇ ತಿರಸ್ಕರಿಸಲಾಗುವುದು.

ತೋಟಗಾರಿಕೆ ನಿರ್ದೇಶಕರು
ಹಾಗೂ ಆಯ್ಕೆ ಪ್ರಾಧಿಕಾರ.

ಪಿ.ಆರ್.467

## ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ಕೋರ್ಟ್, ಕೊರಟಗೆರೆ

**ಜಿ.ಟಿ. ನಂ. 207/ 04, ಕೊರಟಗೆರೆ, ದಿನಾಂಕ: 25ನೇ ಸೆಪ್ಟೆಂಬರ್, 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 4ನೇ ಡಿಸೆಂಬರ್, 2004ರಂದು ಬೆಳಿಗ್ಗೆ 11-00 ಘಂಟೆಗೆ ಕೊರಟಗೆರೆ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ರವರ ನ್ಯಾಯಾಲಯದಲ್ಲಿ ಈ ಕೆಳಗೆ ನಮೂದು ಮಾಡಿರುವ ಮುದ್ದೆಮಾಲುಗಳನ್ನು ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆಯುಳ್ಳ ವ್ಯಕ್ತಿಗಳು ಈ ಹರಾಜಿನಲ್ಲಿ ಭಾಗವಹಿಸಿ ಬಿಡ್ ಮಾಡಬಹುದು. ಯಾರ ಹೆಸರಿಗೆ ಬಿಡ್ ನಿಲ್ಲುವುದೋ ಅವರು ಸ್ಥಳದಲ್ಲಿಯೇ ಹಣವನ್ನು ಪಾವತಿ ಮಾಡಿ ಸಂಬಂಧಪಟ್ಟವರು ತೆಗೆದುಕೊಂಡು ಹೋಗತಕ್ಕದ್ದು. ಬಿಡ್ಡನ್ನು ಪುರಸ್ಕರಿಸುವುದು ಅಥವಾ ತಿರಸ್ಕರಿಸುವುದು ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ. ರವರಿಗೆ ಸೇರಿದ್ದು.

| ಕ್ರಮ ಸಂಖ್ಯೆ | ಕೇಸ್ ನಂಬರ್ | ಪಿ.ಆರ್. ನಂಬರ್ | ಹರಾಜು ಮಾಡುವ ಸ್ವತ್ತುಗಳು |
|---|---|---|---|
| 1. | ಸಿ.ಸಿ. ನಂ. 225:98 | 90:03 | ಸುಮಾರು 6 ಕೆ.ಜಿ. ತಾಮ್ರದ ವೈರ್ |

ಕೊರಟಗೆರೆ, ದಿನಾಂಕ: 25.09.04.

ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ,
ಕೊರಟಗೆರೆ.

ಪಿ.ಆರ್.468

## ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಬಳ್ಳಾರಿ ಜಿಲ್ಲೆ

## ಅಲ್ಪಾವಧಿ ಟೆಂಡರ್ ಪ್ರಕಟಣೆ

**ನಂ. ಡಿಎಎಂ:ಸಂ.ವಿ.1 ಮತ್ತು 2: ಹೊಸಪೇಟೆ:ಟೆಂಡರ್.3: 2004-05/ 361-391, ದಿನಾಂಕ: 15ನೇ ಸೆಪ್ಟೆಂಬರ್, 2004**

ಕರ್ನಾಟಕ ರಾಜ್ಯಪಾಲರ ಪರವಾಗಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಬಳ್ಳಾರಿ ಜಿಲ್ಲೆ ಇವರಿಂದ ಈ ಕೆಳಕಂಡ ಕಾಮಗಾರಿ ಕೆಲಸಗಳಿಗೆ ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ 2000-2005ನೇ ಅವಧಿಗೆ ನೋಂದಾಯಿಸಿದ ಗುತ್ತಿಗೆದಾರರಿಂದ ಐಟಂವಾರು ದರಗಳನ್ನು ನಮೂದಿಸಿದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ನಿಗದಿತ ಇ.ಎಂ.ಡಿ. ಹಣದೊಂದಿಗೆ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರನ್ನು ನಮೂದಿಸಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ದಿನಾಂಕ: 20.10.2004ರಂದು ಭಾರತೀಯ ಕಾಲಮಾನ ಮಧ್ಯಾಹ್ನ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದಲ್ಲಿ ಅದೇ ದಿವಸ ಟೆಂಡರ್‌ಗಳನ್ನು ಅಪರಾಹ್ನ 4.30 ಘಂಟೆಯ ನಂತರ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಕಂಡ ಕೆಲಸಗಳಿಗೆ ಟೆಂಡರ್ ಫಾರಂಗಳಿಗಾಗಿ ನಿಗದಿತ ಟೆಂಡರ್ ಫಾರಂ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 12.10.2004 ಸಾಯಂಕಾಲ

5.30ರವರೆಗೆ. ಟೆಂಡರ್ ಫಾರಂ ಶುಲ್ಕವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ಖಾಲಿ ಟೆಂಡರ್ ಫಾರಂಗಳನ್ನು ದಿನಾಂಕ: 15.10.2004 ರಿಂದ 18.10.2004ರವರೆಗೆ ವಿತರಿಸಲಾಗುವುದು.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. ರೂ.ಗಳಲ್ಲಿ | ಖಾಲಿ ಟೆಂಡರ್ ಫಾರಂ ದರ ರೂ. (ತೆರಿಗೆ ಸೇರಿಕೊಂಡು ಹಿಂದಿರುಗಿಸಲಾಗುವುದಿಲ್ಲ) (ಕೆ.ಎಸ್.ಟಿ. 8%+4% ಎಸ್.ಸಿ.ಆನ್. ಕೆ.ಎಸ್.ಟಿ.) | ಗುತ್ತಿಗೆದಾರರ ದರ್ಜೆ | ಕಾಮಗಾರಿ ಪೂರ್ಣ ಗೊಳಿಸುವ ಅವಧಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾದಲ್ಲಿರುವ ಎಚ್. ಕಮಲ ದರ್ಗಾದ ಸಂರಕ್ಷಣಾ ಕೆಲಸ. | 4,98,920.00 | 12,500.00 | 1,000.00 | ಮೂರನೇ ದರ್ಜೆ ಮೇಲ್ಪಟ್ಟು | 4 ತಿಂಗಳು ಮಳೆಗಾಲ ಬಿಟ್ಟು |
| 2. | ರಾಯಚೂರು ಜಿಲ್ಲೆ, ರಾಯಚೂರು ಪಟ್ಟಣದಲ್ಲಿರುವ ನವರಂಗ ದರವಾಜಾದ ಕೋಟೆ ಸಂರಕ್ಷಣಾ ಕೆಲಸ. | 4,99,900.00 | 12,500.00 | 1,000.00 | ಮೂರನೇ ದರ್ಜೆ ಮೇಲ್ಪಟ್ಟು | 4 ತಿಂಗಳು ಮಳೆಗಾಲ ಬಿಟ್ಟು |
| 3. | ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾನಗರದ ಹೊರವಲಯದಲ್ಲಿರುವ ಚೋರ್ ಗುಂಬಸ್‌ನ ಸಂರಕ್ಷಣಾ ಕೆಲಸ. | 2,87,627.00 | 7,200.00 | 1,000.00 | ಮೂರನೇ ದರ್ಜೆ ಮೇಲ್ಪಟ್ಟು | 4 ತಿಂಗಳು ಮಳೆಗಾಲ ಬಿಟ್ಟು (ಎರಡನೇ ಕರೆ) |
| 4. | ಗದಗ ಜಿಲ್ಲೆ, ಗದಗದಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯದ ಅಭಿವೃದ್ಧಿ ಕೆಲಸ. | 1,99,000.00 | 4,975.00 | 600.00 | ಮೂರನೇ ದರ್ಜೆ ಮೇಲ್ಪಟ್ಟು | 3 ತಿಂಗಳು ಮಳೆಗಾಲ ಬಿಟ್ಟು |
| 5. | ಮೈಸೂರು ಜಿಲ್ಲೆ, ಮೈಸೂರು ತಾ. ಮೈಸೂರು ನಗರದ ಇರ್ವಿನ್ ರಸ್ತೆಯಲ್ಲಿರುವ ವೆಲ್ಲಿಂಗ್ಟನ್ ವಸ್ತು ಸಂಗ್ರಹಾಲಯದ ಅಭಿವೃದ್ಧಿ ಕೆಲಸ. | 3,40,539.00 | 8,520.00 | 1,000.00 | ಮೂರನೇ ದರ್ಜೆ ಮೇಲ್ಪಟ್ಟು | 4 ತಿಂಗಳು ಮಳೆಗಾಲ ಬಿಟ್ಟು |
| 6. | ಬೆಳಗಾಂ ಜಿಲ್ಲೆ, ಬೈಲಹೊಂಗಲ ತಾ: ಕಿತ್ತೂರಿನಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯಕ್ಕೆ ಕುಡಿಯುವ ನೀರು ಶೌಚಾಲಯ ಹಾಗೂ ತೋಟಗಾರಿಕಾ ಕಾಮಗಾರಿ. | 2,90,000.00 | 7,250.00 | 1,000.00 | ಮೂರನೇ ದರ್ಜೆ ಮೇಲ್ಪಟ್ಟು | 4 ತಿಂಗಳು ಮಳೆಗಾಲ ಬಿಟ್ಟು |

| 1 | 2 | 3 | 4 | 5 | 6 | 7 |
|---|---|---|---|---|---|---|
| 7. | ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ನಗರದಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯಕ್ಕೆ ಶೌಚಾಲಯ ದುರಸ್ತಿ, ತೋಟಗಾರಿಕಾ ಕೆಲಸ, ಕುಡಿಯುವ ನೀರಿನ ಕಾಮಗಾರಿ | 2,20,000.00 | 5,500.00 | 1,000.00 | ಮೂರನೇ ದರ್ಜೆ ಮೇಲ್ಪಟ್ಟು | 3 ತಿಂಗಳು ಮಳೆಗಾಲ ಬಿಟ್ಟು |

**ನಿಯಮಗಳು ಮತ್ತು ಸೂಚನೆಗಳು:**

1. ಟೆಂಡರ್ ಹಾಕಲು ಇಚ್ಛಿಸುವ ಗುತ್ತಿಗೆದಾರರು ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದಲ್ಲಿಯಾಗಲಿ ಹಾಗೂ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯಲ್ಲಿ ಈ ರೀತಿಯ ಕಾಮಗಾರಿಯನ್ನು ಅಂದರೆ ಸ್ಮಾರಕಗಳ ಸಂರಕ್ಷಣಾ ಕಾಮಗಾರಿಯನ್ನು ಯಶಸ್ವಿಯಾಗಿ ಮುಗಿಸಿದವರಾಗಿರಬೇಕು.
2. ಕೆಲಸದ ಅಂದಾಜು ಮೊತ್ತಕ್ಕಿಂತ ಶೇ.50ರಷ್ಟು ಮೊತ್ತಕ್ಕೆ ಕಡಿಮೆ ಇರದಂತೆ, ಇದೇ ರೀತಿಯ ಒಂದು ಕೆಲಸವನ್ನು ಸಮರ್ಪಕವಾಗಿ ಐದು ವರ್ಷದ ಬ್ಲಾಕ್ ಅವಧಿಯಲ್ಲಿ ನಿರ್ವಹಿಸಿದ ಬಗ್ಗೆ ಸಂಬಂಧಪಟ್ಟ ಅಧಿಕಾರಿಯು ನೀಡಿದ ದಾಖಲಾತಿ ಪ್ರಮಾಣ ಪತ್ರವನ್ನು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸುವಾಗ ಸಲ್ಲಿಸಬೇಕು. ಹಾಗೂ ಚಾಲ್ತಿ ಸಾಲಿನಲ್ಲಿನ ಆದಾಯ ತೆರಿಗೆ ಸಲ್ಲಿಸಿದ ಬಗ್ಗೆ ದಾಖಲೆ ನೀಡುವುದು. ಅವಶ್ಯಕ ದಾಖಲೆಗಳು ಇಲ್ಲದ ಮನವಿಯನ್ನು ತಿರಸ್ಕರಿಸಲಾಗುವುದು.
3. ಮೇಲಿನ ಕಾಮಗಾರಿಗಳಿಗೆ ಅಗತ್ಯವಾದ ಎಲ್ಲಾ ಉಪಕರಣಗಳನ್ನು ಹೊಂದಿರಬೇಕು ಹಾಗೂ ನುರಿತ ಕೆಲಸದವರನ್ನು ಹೊಂದಿರಬೇಕು.
4. ಗುತ್ತಿಗೆದಾರರು ಮೇಲ್ಕಂಡ ಸಂರಕ್ಷಣಾ ಕೆಲಸಕ್ಕೆ ಅರ್ಜಿ ಸಲ್ಲಿಸುವಾಗ ನೋಂದಣಿ ಪುಸ್ತಕ ಪ್ರಮಾಣ ಪತ್ರದ ನಕಲನ್ನು ಅರ್ಜಿಯೊಂದಿಗೆ ಲಗತ್ತಿಸುವುದು ಕಡ್ಡಾಯವಾಗಿರುತ್ತದೆ.
5. ಟೆಂಡರ್‌ನಲ್ಲಿ ನಮೂದಿಸಿದ ದರಗಳು 1 ವರ್ಷದವರೆಗೆ ಮೌಲ್ಯ ಹೊಂದಿರಬೇಕು, ನಿಬಂಧನೆಯುಕ್ತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಯಾವುದೇ ಕಾರಣ ನೀಡದೆ ಯಾವುದೇ ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ ಇವರು ಕಾದಿರಿಸಿರುತ್ತಾರೆ.
7. ಮೇಲಿನ ಕಾಮಗಾರಿಗಳಲ್ಲಿ ಏನಾದರೂ ಸೇರ್ಪಡೆ ಅಥವಾ ಮಾರ್ಪಡಿಸುವ ಬಗೆಗೆ ಹಕ್ಕನ್ನು ಕಾಯ್ದಿರಿಸಲಾಗಿದೆ.
8. ಖಾಲಿ ಟೆಂಡರ್ ಫಾರಂ ಹಣ ಹಾಗೂ ಇ.ಎಂ.ಡಿ. ಹಣವನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿ.ಡಿ. ಅಥವಾ ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ, ಇವರ ಹೆಸರಿನಲ್ಲಿ ಪಾವತಿ ಮಾಡುವುದು.
9. ಟೆಂಡರ್ ಲಕೋಟೆಯನ್ನು ಸಲ್ಲಿಸುವಾಗ ನಿಗದಿತ ಇ.ಎಂ.ಡಿ. ಹಣವನ್ನು ಡಿ.ಡಿ. ಅಥವಾ ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸಲ್ಲಿಸದಿರುವಂತಹ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.
10. ಮೇಲಿನ ನಿಯಮಗಳ ಪ್ರಕಾರ ಅರ್ಹರಿರುವ ಗುತ್ತಿಗೆದಾರರಿಗೆ ಮಾತ್ರ ಖಾಲಿ ಟೆಂಡರ್ ಫಾರಂ ಕೊಡಲಾಗುವುದು.
11. ಹೆಚ್ಚಿನ ವಿವರಗಳು ಬೇಕಾದಲ್ಲಿ ಕಛೇರಿಯಿಂದ ಪಡೆದುಕೊಳ್ಳುವುದು.

ನಿರ್ದೇಶಕರು,
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ
ನಿರ್ದೇಶನಾಲಯ, ಹೊಸಪೇಟೆ.

ಪಿ.ಆರ್.469

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿಯವರ ಕಛೇರಿ, ದಕ್ಷಿಣ ಕನ್ನಡ ಉಪವಿಭಾಗ-1, ಮಂಗಳೂರು

### ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಕಾಕಕೇ:ಮಂ: ಇಎಸ್‌ಟಿ:ಸಿಆರ್-9:04-05, ದಿನಾಂಕ: 30ನೇ ಸೆಪ್ಟೆಂಬರ್, 2004**

**ವಿಷಯ :** ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಮಂಗಳೂರು ಹಾಗೂ ಉಳ್ಳಾಲ ಕಾರ್ಮಿಕ ಕಲ್ಯಾಣ ಕೇಂದ್ರದ ಪೀಠೋಪಕರಣ ಹಾಗೂ ಇತರ ಸಾಮಗ್ರಿಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಮಂಜೂರಾತಿ ಪತ್ರದ ಸಂಖ್ಯೆ: ಕಾಇ 103 ಎಲಿಟಿ:2004 ದಿನಾಂಕ: 13.04.2004.

2. ಮಾನ್ಯ ಕಲ್ಯಾಣ ಆಯುಕ್ತರು, ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು ಇವರ ಕಛೇರಿ ಆದೇಶ ಸಂಖ್ಯೆ: ಕಾಕನಿ: ಆಡಳಿತ-1:ಸಿಆರ್:72:03-04, ದಿನಾಂಕ: 13.04.2004.

ಉಲ್ಲೇಖದಲ್ಲಿ ತಿಳಿಸಿರುವ ಸರ್ಕಾರದ ಆದೇಶದ ಪ್ರಕಾರ, **"ಮಂಗಳೂರು ಹಾಗೂ ಉಳ್ಳಾಲ ಕಾರ್ಮಿಕ ಕಲ್ಯಾಣ ಕೇಂದ್ರ"** ಕ್ಕೆ ಸಂಬಂಧಪಟ್ಟ ಅನುಬಂಧದಲ್ಲಿ ತೋರಿಸಿರುವ ಪೀಠೋಪಕರಣ ಹಾಗೂ ಇತರ ಸಾಮಗ್ರಿಗಳನ್ನು ದಿನಾಂಕ: **09.12.2004ರಂದು ಬೆಳಿಗ್ಗೆ 11.00 ಗಂಟೆಗೆ** ಕಾರ್ಮಿಕ ಅಧಿಕಾರಿಯವರ ಕಛೇರಿ, ದ.ಕ. ಉಪವಿಭಾಗ-1, ಬೆಂದೂರ್ ವೆಲ್ ಕಂಕನಾಡಿ, ಮಂಗಳೂರು ಇವರ ಕಛೇರಿ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ಯಾವ ರೀತಿ ಇದೆಯೋ ಅದೇ ರೀತಿ ವಿಲೇವಾರಿ ಮಾಡಲಾಗುವುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳಿಯ ಪಡಿಸಲಾಗಿದೆ.

**ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು**

**ಅನುಬಂಧ**

**ಕಾರ್ಮಿಕ ಕಲ್ಯಾಣ ಕೇಂದ್ರ, ಮಂಗಳೂರು**

**ಪೀಠೋಪಕರಣಗಳು:**

| ಕ್ರ.ಸಂ. | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರ | ಸುಸ್ಥಿತಿ | ದುಸ್ಥಿತಿ | ಒಟ್ಟು |
|---|---|---|---|---|
| 1. | ಗ್ಲಾಸ್ ಶಟರ್ ಮರದ ಕಪಾಟು | - | 1 | 1 |
| 2. | ಮರದ ಕುರ್ಚಿಗಳು | - | 2 | 2 |
| 3. | ಮರದ ಬೆಂಚುಗಳು | - | 2 | 2 |
| 4. | ಮರದ ಮೇಜು | - | 1 | 1 |
| **ಇತರೆ ಸಾಮಗ್ರಿಗಳು:** | | | | |
| 1. | ಸ್ಟೆಬಿಲೈಸರ್ | 1 | - | 1 |
| 2. | ಸ್ಟೀಲ್ ಡ್ರಮ್ | 1 | - | 1 |

**ಕಾರ್ಮಿಕ ಕಲ್ಯಾಣ ಕೇಂದ್ರ, ಉಳ್ಳಾಲ**

**ಕ್ರೀಡಾ ಸಾಮಗ್ರಿಗಳು:**

| ಕ್ರ.ಸಂ. | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರ | ಸುಸ್ಥಿತಿ | ದುಸ್ಥಿತಿ | ಒಟ್ಟು |
|---|---|---|---|---|
| 1. | ಲೇಜಿಮ್ | 12 | - | 12 |

**ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರನು ರೂ.750-00ಗಳನ್ನು ಈ ಕಛೇರಿಯಲ್ಲಿ ಮುಂಗಡವಾಗಿ ಬಹಿರಂಗ ಹರಾಜಿನ ದಿನಾಂಕದಂದು ಬೆಳಿಗ್ಗೆ 10-30 ಗಂಟೆಗಳ ಒಳಗಾಗಿ ಠೇವಣಿ ಮಾಡಿ ನಂತರ ಹರಾಜಿನಲ್ಲಿ ಭಾಗವಹಿಸಬಹುದು. ಠೇವಣಿ ಮಾಡಿದ ಬಿಡ್ಡುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
2. ಕಲ್ಯಾಣ ಆಯುಕ್ತರು, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು, ಇವರಿಂದ ನೇಮಿಸಲ್ಪಟ್ಟ ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪವಿಭಾಗ-1, ಮಂಗಳೂರು ಇವರು ಬಹಿರಂಗ ಹರಾಜು ನಡೆಸುವ ಅಧಿಕಾರ ಹೊಂದಿರುತ್ತಾರೆ.
3. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತಕ್ಕೆ ಕರೆದಂತಹ ಸವಾಲುದಾರನನ್ನು ಯಶಸ್ವಿ ಸವಾಲುದಾರನೆಂದು ಪರಿಗಣಿಸಲಾಗುವುದು.
4. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಗೆ ಕೂಗಿದ ಹರಾಜುದಾರನು, ಹರಾಜಿನಲ್ಲಿ ಕೂಗಿದ ಒಟ್ಟು ಮೊತ್ತದ ಶೇಕಡ 25ರಷ್ಟು ಮೊತ್ತವನ್ನು ಸ್ಥಳದಲ್ಲಿಯೇ ನಗದಾಗಿ ಪಾವತಿಸಬೇಕು. (ಠೇವಣಿ ಮೊತ್ತವನ್ನು ಹೊರತುಪಡಿಸಿ), ಸದರಿ ಹರಾಜನ್ನು ಕಾರ್ಮಿಕ ಅಧಿಕಾರಿಗಳು ಅಂಗೀಕರಿಸಲ್ಪಟ್ಟು ನಂತರ ಉಳಿದ ಶೇಕಡಾ 75ರಷ್ಟು ಮೊತ್ತವನ್ನು ನಗದಾಗಿ ಪಾವತಿಸಿದ ನಂತರ ತಮ್ಮ ಸ್ವಂತ ಖರ್ಚಿನಿಂದ ಹಾಗೂ ಬಹಿರಂಗ ಹರಾಜು ಆದ ದಿನಾಂಕದಿಂದ 7 ದಿನಗಳೊಳಗಾಗಿ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು.
5. ಎಲ್ಲಾ ಹಣವನ್ನು ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪವಿಭಾಗ-1, ಮಂಗಳೂರು ಇವರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು/ ಡಿ.ಡಿ.ಗಳನ್ನು ಸ್ವೀಕರಿಸಲಾಗುವುದಿಲ್ಲ.
6. ಮಾರಾಟ ತೆರಿಗೆಯನ್ನು ಹಾಗೂ ಸರ್ಕಾರಕ್ಕೆ ಪಾವತಿಸಬೇಕಾದ ಇತರ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲು ಮಾಡಲಾಗುವುದು.
7. ಬಹಿರಂಗ ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಕಾರ್ಮಿಕ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮ ತೀರ್ಮಾನವಾಗಿರುತ್ತದೆ.
8. ಬಹಿರಂಗ ಹರಾಜನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ಕರೆದಿರುವುದನ್ನು ತಿರಸ್ಕರಿಸುವ ಅಧಿಕಾರವನ್ನು ಕಾರ್ಮಿಕ ಅಧಿಕಾರಿಗಳು, ದಕ್ಷಿಣ ಕನ್ನಡ ಉಪವಿಭಾಗ-1, ಮಂಗಳೂರು ಇವರು ಹೊಂದಿರುತ್ತಾರೆ.
9. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಹರಾಜು ಮಾಡಲಿಕ್ಕಿರುವ ಸಾಮಗ್ರಿಗಳನ್ನು ಹೇಗಿದೆಯೋ ಹಾಗೇ ಇರುವ ಸ್ಥಿತಿಯಲ್ಲಿ ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪವಿಭಾಗ-1, ಮಂಗಳೂರು ಇವರ ಕಛೇರಿಯಲ್ಲಿ ಬಿಡ್ಡು ಕರೆಯುವ ದಿನಾಂಕಕ್ಕಿಂತಲೂ ಮುಂಚಿತವಾಗಿ ನೋಡಬಹುದಾಗಿರುತ್ತದೆ.

